KA/ BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜುಲೈ ೭, ೨೦೧೧ (ಆಷಾಢ ೧೬, ಶಕ ವರ್ಷ ೧೯೩೩) | ಸಂಚಿಕೆ ೨೭ |
|---|---|---|

## ಭಾಗ – ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಿಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು

### ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 13 ಡಿಪಿಐ 2011, ಬೆಂಗಳೂರು, ದಿನಾಂಕ: 16ನೇ ಮೇ, 2011**

ಸಾರ್ವಜನಿಕ ಶಿಕ್ಷಣ ಇಲಾಖೆಯ ಈ ಕೆಳಕಂಡ ಉಪ ನಿರ್ದೇಶಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಗಳಿಗೆ ₹. 20025–28275ಗಳ ವೇತನ ಶ್ರೇಣಿಯ ಸಹ ನಿರ್ದೇಶಕರು ಹಾಗೂ ತತ್ಸಮಾನ ವೃಂದದ ಹುದ್ದೆಗೆ, ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಲಾಗಿರುವ ಹುದ್ದೆ ಮತ್ತು ಸ್ಥಳಗಳಿಗೆ ನೇಮಿಸಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ಬಡ್ತಿ ಮೂಲಕ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆ ಮತ್ತು ಸ್ಥಳ |
|---|---|---|
| 1. | ಶ್ರೀಮತಿ ಎಸ್. ಜಿ. ಕಮಲ,<br>ರೀಡರ್, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಮೈಸೂರು | ಸಹ ನಿರ್ದೇಶಕರು, (ಶಾಲಾ ಶಿಕ್ಷಣ) ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು (ಖಾಲಿ ಹುದ್ದೆ) |
| 2. | ಶ್ರೀ ಪ್ರಭಾಕರ, ಪ್ರಾಂಶುಪಾಲರು,<br>ಜಿಲ್ಲಾ ಶಿಕ್ಷಣ ತರಬೇತಿ ಸಂಸ್ಥೆ, ತುಮಕೂರು | ಸಹ ನಿರ್ದೇಶಕರು, ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ, ಬೆಂಗಳೂರು, (ಶ್ರೀ ಎನ್. ಬಿ. ಪಾಟೀಲ್, ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳಕ್ಕೆ) |
| 3. | ಶ್ರೀ ಸೈಯದ್ ನಾಜರುದ್ದಿನ್ ಖಾಜಿ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಗದಗ | ಸಹ ನಿರ್ದೇಶಕರು, ಡಿ.ಎಸ್.ಇ.ಆರ್.ಟಿ. ಬೆಂಗಳೂರು (ಖಾಲಿ ಹುದ್ದೆ) |
| 4. | ಡಾ: ಬಿ. ವಿ. ಮಹಿದಾಸ್,<br>ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ | ಸಹ ನಿರ್ದೇಶಕರು,ಸರ್ವ ಶಿಕ್ಷಣ ಅಭಿಯಾನ ರಾಜ್ಯ ಕಛೇರಿ, ಬೆಂಗಳೂರು (ಶ್ರೀ ಕೆ. ಎಸ್. ಶ್ರೀನಿವಾಸಲು ಇವರ ನಿಯೋಜನೆಯಿಂದ ತೆರವಾದ ಸ್ಥಳಕ್ಕೆ) |
| 5. | ಶ್ರೀ ಸೈಯದ್ ಖಲಂದರ್, ರೀಡರ್,<br>ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಮಂಗಳೂರು | ಪ್ರಾಚಾರ್ಯರು, ಸಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಮಂಗಳೂರು (ಖಾಲಿ ಹುದ್ದೆ) |
| 6. | ಶ್ರೀ ವಿ. ಎಂ. ಉಮಾಕಾಂತ,<br>ವಿಶೇಷಾಧಿಕಾರಿ ಹಾಗೂ ಉಪ ನಿರ್ದೇಶಕರು,<br>ಶಿಕ್ಷಕರ ಕಲ್ಯಾಣ ನಿಧಿ, ಬೆಂಗಳೂರು | ವಿಶೇಷಾಧಿಕಾರಿ, ಶಿಕ್ಷಕರ ಕಲ್ಯಾಣ ನಿಧಿ, ಬೆಂಗಳೂರು, ಮೇಲ್ದರ್ಜೆಗೇರಿಸಿದ ಹುದ್ದೆಯಲ್ಲಿ ಮುಂದುವರೆಸಲಾಗಿದೆ. |

ಸಾರ್ವಜನಿಕ ಶಿಕ್ಷಣ ಇಲಾಖೆಯ, ಸಹ ನಿರ್ದೇಶಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಯಾದ ಶ್ರೀ ಎನ್. ಬಿ. ಪಾಟೀಲ್, ಸಹ ನಿರ್ದೇಶಕರು, ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ, ಬೆಂಗಳೂರು, ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಹ ನಿರ್ದೇಶಕರು (ಆಡಳಿತ) ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇಲ್ಲಿ ಖಾಲಿ ಇರುವ ಹುದ್ದೆಗೆ ವರ್ಗಾಯಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ರಾಜಣ್ಣ,**
ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ),
ಶಿಕ್ಷಣ ಇಲಾಖೆ.

**ಪಿ.ಆರ್. 681**

ತಿದ್ದುಪಡಿ/ಸೇರ್ಪಡೆ

**ಸಂಖ್ಯೆ: ಇಡಿ 31 ಡಿಪಿಐ 2010, ಬೆಂಗಳೂರು, ದಿನಾಂಕ: 23ನೇ ಮೇ, 2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 31 ಡಿಪಿಐ 2010, ದಿನಾಂಕ: 31–01–2010ರ ಅಧಿಸೂಚನೆಯಲ್ಲಿ ಅಧಿಸೂಚನೆಯ ದಿನಾಂಕವನ್ನು 31–01–2011 ಎಂದು ತಿದ್ದಿ ಓದಿಕೊಳ್ಳತಕ್ಕದ್ದು ಹಾಗೂ ಇದೇ ಅಧಿಸೂಚನೆಯ ಕ್ರಮ ಸಂಖ್ಯೆ: 4 ಮತ್ತು ಕ್ರಮ ಸಂಖ್ಯೆ: 21ರ ಹೆಸರಿನ ಮುಂದೆ ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಹುದ್ದೆ | ಜನ್ಮ ದಿನಾಂಕ | ನಿವೃತ್ತಿ ದಿನಾಂಕ |
|---|---|---|---|
| | ಸಹ ನಿರ್ದೇಶಕರ ವೃಂದ | | |
| 1. | ಶ್ರೀ ರಾಮಚಂದ್ರ ವೈ ಹೊಸಪೇಟೆ, ಪ್ರಾಂಶುಪಾಲರು, ಸಿ.ಟಿ.ಇ. ಜಮಖಂಡಿ | 02–06–1951 | 30–06–2011 |
| | ಉಪ ನಿರ್ದೇಶಕರ ವೃಂದ | | |
| 2. | ಶ್ರೀ ಸಿ. ಯು. ಚಂದ್ರಶೇಖರ್, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕಬಳ್ಳಾಪುರ | 21–09–1951 | 30–09–2011 |

ಇದೇ ಅಧಿಸೂಚನೆಯಲ್ಲಿ ಕ್ರಮ ಸಂಖ್ಯೆ: 25ರ ನಂತರ ಈ ಕೆಳಕಂಡ 02 ಹೆಸರುಗಳನ್ನು ಸೇರ್ಪಡೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಹುದ್ದೆ | ಜನ್ಮ ದಿನಾಂಕ | ನಿವೃತ್ತಿ ದಿನಾಂಕ |
|---|---|---|---|
| | ಉಪ ನಿರ್ದೇಶಕರ ವೃಂದ | | |
| 26. | ಶ್ರೀ ಎ. ಸಿ. ಹಿರೇಮಠ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ | 01–06–1951 | 31–05–2011 |
| 27. | ಶ್ರೀ ಬಿ. ನಾರಾಯಣ, ಉಪ ನಿರ್ದೇಶಕರು ಆಯುಕ್ತರ ಕಛೇರಿ,ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | 06–08–1951 | 31–08–2011 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಿ. ಸಸಾಲಟ್ಟಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಆಡಳಿತ)

**ಪಿ.ಆರ್. 683**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 734 ಪಿಎಂಎಸ್ 2010, ಬೆಂಗಳೂರು, ದಿನಾಂಕ: 04ನೇ ಮೇ, 2011**

1872ರ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ 7ರ (ಕೇಂದ್ರ ಕಾಯ್ದೆ ವಿ–1872) ಅನ್ವಯ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ರೋನಾಲ್ಡ್ ಬಿ ಫುರ್ಟಾಡೊ, ನ್ಯಾಯವಾದಿಗಳು, ಬೈಕಾಡಿ ಗ್ರಾಮ, ಬ್ರಹ್ಮಾವರ ಅಂಚೆ, ಬ್ರಹ್ಮಾವರ–576213, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ ಇವರನ್ನು ಮೇಲಿನ ಕಾಯ್ದೆಯಡಿ ಕಾರ್ಯನಿರ್ವಹಿಸಲು ಕ್ರಿಶ್ಚಿಯನ್ ಜನಾಂಗದ ವಿವಾಹ ನೋಂದಣಾಧಿಕಾರಿಯನ್ನಾಗಿ ಉಡುಪಿ ಜಿಲ್ಲೆಯ ಆಡಳಿತ ವ್ಯಾಪ್ತಿಗೆ ಮಾತ್ರ ಸೀಮಿತಗೊಳಿಸಿ, ಸದರಿ ಕಾಯ್ದೆಯಡಿಯಲ್ಲಿ ಸೂಚಿಸಿರುವ ಷರತ್ತುಗಳನ್ನು ಪೂರೈಸುವ ಷರತ್ತಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆಲಿಸ್ ಗೊನ್ಸಾಲ್ವಿಸ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ರಹದಾರಿ ಮತ್ತು ವಿದೇಶಿಯರು)

**ಪಿ.ಆರ್. 684**

### ಅಧಿಸೂಚನೆ

**ಸಂಖ್ಯೆ: ಒಇ 81 ಪೊಸಿಲಿ 2010, ಬೆಂಗಳೂರು, ದಿನಾಂಕ: 25ನೇ ಮೇ, 2011**

ರಾಜ್ಯ ಪೊಲೀಸ್ ಇಲಾಖೆಯಲ್ಲಿನ ಸಹಾಯಕ ಆಡಳಿತಾಧಿಕಾರಿಗಳ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯ ನಿರ್ವಹಿಸುತ್ತಿರುವ/ ಶಾಖಾಧೀಕ್ಷಕರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ (₹. 11400–21600)ಯಲ್ಲಿರುವ ಸಹಾಯಕ ಆಡಳಿತಾಧಿಕಾರಿಗಳ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಿ ಅವರು ಪ್ರಸ್ತುತ ಸ್ವತಂತ್ರ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಗಳಲ್ಲಿಯೇ ಮುಂದುವರೆಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಶ್ರೀಯುತರು/ಶ್ರೀಮತಿ: | ಕ್ರಮ ಸಂಖ್ಯೆ | ಹೆಸರು ಶ್ರೀಯುತರು/ಶ್ರೀಮತಿ: |
|---|---|---|---|
| 1. | ಶಾಂತಯ್ಯ ಕರ್ಜಗಿ | 10 | ಚಂದ್ರಶೇಖರಯ್ಯ ಪಿ. ಜೆ. |
| 2. | ವಿ. ಚಿನ್ನಪ್ಪ (ಎಸ್. ಟಿ.) | 11 | ಮಾಗಡಯ್ಯ ಎ. ಆರ್. |
| 3. | ಹೆಚ್. ವಿ. ಜಾನಕಮ್ಮ | 12 | ಪಾಲ್ ಬುಥೆಲೋ |
| 4. | ವಳ್ಳಿಯಮ್ಮ ಜಿ | 13. | ಶಿವರಾಮು |

| | | | |
|---|---|---|---|
| 5. | ಶ್ರೀನಿವಾಸ ರಾವ್ ಎ. | 14. | ಪೂಜಾರಿ ಸೇವಾ ನಾಯ್ಕ |
| 6. | ಸಿದ್ದಿಕಿ ಹೆಚ್. ಎ. | 15. | ಆನಂದ ಐತಾಳ್ |
| 7. | ಎಂ. ಹೆಚ್. ಕುಂದನ್ ಎಸ್. ಸಿ. | 16. | ರಾಮಚಂದ್ರ ಹೆಚ್. ಟಿ. |
| 8. | ತಂಗೋಡ ಹೆಚ್. ಆರ್. | 17. | ಕೃಷ್ಣ ಡಿ. ಕೆ. |
| 9. | ಅನ್ನಪೂರ್ಣ ಹೆಚ್. ಎನ್. | 18 | ಹಲ್ಲೂರ್ ಅಬ್ದುಲ್ ರಜಾಕ್ ಲಾಡ್ |

ಶಾಖಾಧೀಕ್ಷಕರ ಹುದ್ದೆಯಿಂದ ಮುಂಬಡ್ತಿ ಪಡೆದ ಅಧಿಕಾರಿಗಳಿಗೆ ಡಿ.ಜಿ ಮತ್ತು ಐಜಿಪಿರವರು ಖಾಲಿ ಇರುವ ಸಹಾಯಕ ಆಡಳಿತಾಧಿಕಾರಿ ಹುದ್ದೆಗಳಿಗೆ ಸ್ಥಳ ನೇಮಕಾತಿ ಆದೇಶ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಪಿ.ಆರ್. 685**

## ತಿದ್ದುಪಡಿ

**ಸಂಖ್ಯೆ: ಒಇ 193 ಪಿಪಿಇ 2009, ಬೆಂಗಳೂರು, ದಿನಾಂಕ: 19ನೇ ಮೇ, 2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 85 ಪಿಪಿಇ 2008, ದಿನಾಂಕ: 16–07–2008ರ 2ನೇ ಸಾಲಿನ "ಕರ್ನಾಟಕ ನಾಗರೀಕ ಸೇವಾ ನಿಯಮ 285(1)ರ ಅನ್ವಯ" ಎಂಬುದರ ಬದಲಾಗಿ "ಕರ್ನಾಟಕ ನಾಗರೀಕ ಸೇವಾ ನಿಯಮ 285(1)(ಎ)ರ ಅನ್ವಯ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು.

ಉಳಿದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 85 ಪಿಪಿಇ 2008, ದಿನಾಂಕ 16–07–2009ರಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಸಿ. ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ಪಿ.ಆರ್. 686**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಲಾ 08 ಎಲ್ಎಜಿ 2011, ಬೆಂಗಳೂರು, ದಿನಾಂಕ: 30ನೇ ಮೇ, 2011**

ಶ್ರೀ ಪ್ರಭುಲಿಂಗ ಕೆ. ನಾವದಗಿ (Shri Prabhuling K. Navadgi), ವಕೀಲರು, ಮನೆ ಸಂಖ್ಯೆ: 369, ಆರ್.ಟಿ.ನಗರ ಮುಖ್ಯ ರಸ್ತೆ (ಆರ್.ಟಿ.ನಗರ ಪೊಲೀಸ್ ಠಾಣೆ ಎದುರು), ಆರ್.ಟಿ.ನಗರ, ಬೆಂಗಳೂರು–560032 ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇನ್ನೋರ್ವ ಹೆಚ್ಚುವರಿ ಅಡ್ವೋಕೇಟ್ ಜನರಲ್, ಕರ್ನಾಟಕ, ಆಗಿ ನೇಮಕಾತಿ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುಖದೇವ ಮೋನಪ್ಪ ನಾಯಕ,**
ಸರ್ಕಾರದ ಕಾರ್ಯದರ್ಶಿ (ಪ್ರಭಾರ),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಪಿ.ಆರ್. 687**

## ಅಧಿಸೂಚನೆ

**ಸಂಖ್ಯೆ: ಲಾ 69 ಎಲ್ಸಿಇ 2011, ಬೆಂಗಳೂರು, ದಿನಾಂಕ: 26ನೇ ಮೇ, 2010**

ಕರ್ನಾಟಕ ಕಾನೂನು ಅಧಿಕಾರಿಗಳ ಸೇವೆಗಳು (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳ 1977ರ ನಿಯಮ 26(3) ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಹಾಸನ ಜಿಲ್ಲೆಯ ಒಂದನೇ ಶೀಘ್ರಗತಿ ನ್ಯಾಯಾಲಯದ ವಿಶೇಷ ಸರ್ಕಾರಿ ಅಭಿಯೋಜಕರಾದ ಶ್ರೀ ಜಯದೇವಪ್ಪ ಇವರನ್ನು ದಿನಾಂಕ: 01–06–2011ರಿಂದ ಜಾರಿಗೆ ಬರುವಂತೆ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಪಿ.ಆರ್. 688**

## PERSONNEL AND ADMINISTRATIVE REFORMS SECRETARIAT

### NOTIFICATION

### NO. DPAR 264 SAS 2011, Bangalore, dated 26th May, 2011.

Sri Mohammad Sanaulla, IAS (KN 86), Principal Secretary to Government, Department of Personnel & Administrative Reforms is placed in additional charge of the post of Principal Secretary to Government, DPAR (Administrative Reforms, Training & Political Pensions) until further orders relieving Dr. Amita Prasad, IAS of additional charge.

By Order and in the Name of the Governor of Karnataka,
**N. Srinivasa Murthy,**
Under Secretary to Government
DP & AR (Services-I)

**P.R. 689**

### NOTIFICATION

### NO. DPAR 257 SAS 2011, Bangalore, dated 25th May, 2011.

**Sri K. R. Shashidhar, IAS (KN 90),** Commissioner of Collegiate Education, Bangalore is placed in additional charge of the post of Commissioner of Public Instructions, Bangalore w.e.f. 20-05-2011 during the MCT Phase-IV training period of Sri Tushar Giri Nath, IAS.

By Order and in the Name of the Governor of Karnataka,
**N. Srinivasa Murthy,**
Under Secretary to Government
DP & AR (Services-I)

**P.R. 690**

### NOTIFICATION

### NO. DPAR 265 SAS 2011, Bangalore, dated 27th May, 2011.

The services of ***Sri D. V. Prasad, IAS (KN 84), waiting for posting*** are placed at the disposal of Government of India with immediate effect for being appointed as ***Joint Secretary to Government of India, Department of Industrial Policy and Promotion*** in the Ministry of Commerce & Industry, for a period of five years from the date of taking over charge of the post or until further orders, whichever is earlier.

Sri D. V. Prasad, IAS is relieved from the State Government with effect from the date of issue of this notification.

This is issued in pursuance of the Communication No. 13/9/2011-EO (SM.I.), dated 26-05-2011 of Department of Personnel & Training, Government of India New Delhi and Order No. 13/5/2011-EO(SM.I), dated 26-05-2011 of the Appointments Committee of the Cabinet, New Delhi.

By Order and in the Name of the Governor of Karnataka,
**N. Srinivasa Murthy,**
Under Secretary to Government
DP & AR (Services-I)

**P.R. 691**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಿಆಸುಇ 262 ಸಅಸೇ 2011, ಬೆಂಗಳೂರು, ದಿನಾಂಕ: 27ನೇ ಮೇ, 2011

ಶ್ರೀ ವಡಗಾವೆ ಬಸವರಾಜ್, ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಹಾಯಕ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿಗಳ ಅಭಿವೃದ್ಧಿ ಯೋಜನೆ (ಕೆ–ಶಿಫ್), ಬೆಂಗಳೂರು–ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು–3)

**ಪಿ.ಆರ್. 692**

### ಅಧಿಸೂಚನೆ

### ಸಂಖ್ಯೆ: ಸಿಆಸುಇ 90 ಆಸೇವ 2011, ಬೆಂಗಳೂರು, ದಿನಾಂಕ 27ನೇ ಮೇ, 2011

ಶ್ರೀ ಪಿ. ಎಸ್. ಕಾಂತರಾಜ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಮಾನ್ಯ ಇಂಧನ, ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರ ವಿಶೇಷ ಕರ್ತವ್ಯಾಧಿಕಾರಿ, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಉಪವಿಭಾಗಧಿಕಾರಿ, ಬೆಂಗಳೂರು ದಕ್ಷಿಣ ಉಪವಿಭಾಗ, ಬೆಂಗಳೂರು ಜಿಲ್ಲೆ, ಬೆಂಗಳೂರು ಹುದ್ದೆಗೆ – ಶ್ರೀ ಬಿ. ಹೆಚ್. ಸಿದ್ದಪ್ಪ, ಕೆ.ಎ.ಎಸ್. ಕಿರಿಯ ಶ್ರೇಣಿ, ಇವರ ಸ್ಥಾನದಲ್ಲಿ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು–2)

**ಪಿ.ಆರ್. 693**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 54 ಶಿಸನೇ 2011, ಬೆಂಗಳೂರು, ದಿನಾಂಕ: 25ನೇ ಮೇ, 2011**

ಕರ್ನಾಟಕ ಸಚಿವರುಗಳ ವೈದ್ಯಕೀಯ ಹಾಜರಾತಿಯ ನಿಯಮಗಳು, 1958ರ ನಿಯಮ 10ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ನಿಯಮ 2 (ಬಿ)ನ ಷರತ್ತುಗಳನ್ನು ವಿನಾಯಿತಿಸಿ, ಡಾ|| ಎಸ್.ಸಿ. ಶಂಕರಲಿಂಗಯ್ಯ, ನಂ. 2017/ಎ, 1ನೇ ಬಿ ಮೈನ್, 10ನೇ ಕ್ರಾಸ್ (ವಿಜಯನಗರ ಕ್ಲಬ್, ಕೆ.ಇ.ಬಿ. ಕಚೇರಿ ಹಿಂಭಾಗ), ವಿಜಯನಗರ 2ನೇ ಹಂತ, ಬೆಂಗಳೂರು–560040, ಇವರನ್ನು ಮಾನ್ಯ ಮುಖ್ಯ ಮಂತ್ರಿಯವರ ಆಪ್ತ ವೈದ್ಯ (Authorised Medical Attendant) ರನ್ನಾಗಿ ಸರ್ಕಾರಿ ಅಧಿಸೂಚನೆ ಸಂಖ್ಯೆ : ಸಿಆಸುಇ 42 ಶಿಸನೇ 2009, ದಿನಾಂಕ : 05–05–2009ರಲ್ಲಿ ನೇಮಿಸಿರುವುದನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಡಾ|| ಪಿ. ಜಗದೀಶ್ಚಂದ್ರ, ನಂ. 737, 12ನೇ ಮೇನ್, 3ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–560010, ಇವರನ್ನು ಮಾನ್ಯ ಮುಖ್ಯಮಂತ್ರಿಯವರ ಆಪ್ತ ವೈದ್ಯ (Authorised Medical Attendant) ರನ್ನಾಗಿ ಕೂಡಲೇ ಜಾರಿಗೆ ಬರುವಂತೆ ಸರ್ಕಾರವು ನೇಮಿಸಿದೆ.

ಸದರಿ ವೈದ್ಯರು ಗೌರವ ಧನ/ಭತ್ಯೆಗಳನ್ನು ಪಡೆಯಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಹೆಚ್. ಚಂದ್ರಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

**ಪಿ.ಆರ್. 694**

**ಇಂಧನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಇಎನ್ 70 ಸಮನ್ವಯ 2011, ಬೆಂಗಳೂರು, ದಿನಾಂಕ 23ನೇ ಮೇ, 2011**

ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು ಇದರ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯಿಂದ ವರ್ಗಾವಣೆ ಆದೇಶದಲ್ಲಿರುವ ಶ್ರೀ ಎಸ್. ಸುಮಂತ್, ಎಕ್ಸ್‌ಕ್ಯುಟಿವ್ ಡೈರಕ್ಟರ್, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇವರನ್ನು ಕರ್ನಾಟಕ ವಿದ್ಯುತ್ ಕಾರ್ಖಾನೆ, ಬೆಂಗಳೂರು ಇದರ ವ್ಯವಸ್ಥಾಪಕ ನಿರ್ದೇಶಕರನ್ನಾಗಿ, ಶ್ರೀ ವಿಜಯನರಸಿಂಹ ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ ನೇಮಿಸಲು ಇವರ ಸೇವೆಯನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವಶಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್. ಆರ್. ನಾಗೇಂದ್ರ,**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 695**

**ಅಧಿಸೂಚನೆ**

**ಸಂಖ್ಯೆ: ಇಎನ್ 68 ಸಮನ್ವಯ 2011, ಬೆಂಗಳೂರು, ದಿನಾಂಕ 18ನೇ ಮೇ, 2011**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 247 ಎಸ್‌ಎಎಸ್. 2011 ದಿನಾಂಕ : 13–05–2011ರಲ್ಲಿ ಡಾ|| ಪಿ. ಬೋರೆಗೌಡ, ಕೆ.ಎ.ಎಸ್., ನಿರ್ದೇಶಕರು, ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ಒಳಚರಂಡಿ ಏಜೆನ್ಸಿ ಮತ್ತು ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ಇವರನ್ನು ಶ್ರೀ ಎಂ. ಗೋವಿಂದಪ್ಪ, ವ್ಯವಸ್ಥಾಪಕ ನಿರ್ದೇಶಕರು, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇವರ ವರ್ಗಾವಣೆಯಿಂದ ತೆರವಾದ ಸ್ಥಳಕ್ಕೆ ನೇಮಕ ಮಾಡಲು ಇವರ ಸೇವೆಯನ್ನು ಇಂಧನ ಇಲಾಖೆಗೆ ನೀಡಲಾಗಿದೆ.

ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 72 (ಬಿ) ಮತ್ತು 72 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರನ್ನಾಗಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ನಿರ್ದೇಶಕ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್. ಆರ್. ನಾಗೇಂದ್ರ,**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ.

**ಪಿ.ಆರ್. 696**

**ಅಧಿಸೂಚನೆ**

**ಸಂಖ್ಯೆ: ಇಎನ್ 73 ಸಮನ್ವಯ 2011, ಬೆಂಗಳೂರು, ದಿನಾಂಕ 25ನೇ ಮೇ, 2011**

ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್, ಬೆಂಗಳೂರು ಇದರ ಸಂಸ್ಥಾ ನಿವೇದನಾ ಹಾಗೂ ಸಂಘ ನಿಯಮಾವಳಿ ಪತ್ರದ ಆರ್ಟಿಕಲ್ 93 (ಎ) ಮತ್ತು (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಚಂದ್ರಶೇಖರ್. ಬಿ.ಎಂ, ಆರ್ಥಿಕ ಸಲಹೆಗಾರರು, (Regl. Affairs), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇವರನ್ನು ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್, ಬೆಂಗಳೂರು, ಇದರ ನಿರ್ದೇಶಕರು (ವಾಣಿಜ್ಯ) ಖಾಲಿ ಇರುವ ಹುದ್ದೆಗೆ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ಪಿ.ಆರ್. 697**

**ಅಧಿಸೂಚನೆ**

**ಸಂಖ್ಯೆ: ಇಎನ್ 67 ಸಮನ್ವಯ 2011, ಬೆಂಗಳೂರು, ದಿನಾಂಕ 25ನೇ ಮೇ, 2011**

ಶ್ರೀ ಪಿ. ರವಿಕುಮಾರ್, ಭಾ.ಆ.ಸೇ., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇವರನ್ನು ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ಮೆಮೊರ್ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74(ಎ) ಮತ್ತು (ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ **ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು** ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಹಾಗೂ ಅಧ್ಯಕ್ಷರನ್ನಾಗಿ ಶ್ರೀಮತಿ ಲತಾಕೃಷ್ಣರಾವ್, ಭಾ.ಆ.ಸೇ., ಇವರ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಶ್ರೀ ಪಿ. ರವಿಕುಮಾರ್, ಭಾ.ಆ.ಸೇ., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇವರನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ಮೆಮೊರ್ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74 (ಎ) ಮತ್ತು (ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ **ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಗುಲ್ಬರ್ಗಾ** ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಹಾಗೂ ಅಧ್ಯಕ್ಷರನ್ನಾಗಿ ಶ್ರೀಮತಿ ಲತಾಕೃಷ್ಣರಾವ್, ಭಾ.ಆ.ಸೇ., ಇವರ ಸ್ಥಾನದಲ್ಲಿ ತಕ್ಷಣದಲ್ಲಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಶ್ರೀ ಪಿ. ರವಿಕುಮಾರ್, ಭಾ.ಆ.ಸೇ., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇವರನ್ನು ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್‌ನ ಮೆಮೊರ್ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 93 (ಎ) ಮತ್ತು (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ **ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್, ಬೆಂಗಳೂರು,** ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಹಾಗೂ ಅಧ್ಯಕ್ಷರನ್ನಾಗಿ ಶ್ರೀಮತಿ ಲತಾಕೃಷ್ಣರಾವ್, ಭಾ.ಆ.ಸೇ., ಇವರ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 698**

## HIGH COURT OF KARNATAKA

**NOTIFICATION**

**No. HCE. 414/2011, Bangalore, Dated 31st May, 2011.**

Smt. H.S. Prathima Devi, Section Officer of this office is permitted to retire from service voluntarily w.e.f. the afternoon of 31-05-2011, under Rule 285(1) (a) of KCSRs.

BY ORDER OF HON'BLE THE CHIEF JUSTICE,
**K. SOMASHEKAR,**
REGISTRAR (JUDICIAL)

**P.R. 699**

**NOTIFICATION**

**No. HCE. 428/2011, Bangalore, Dated 27th May, 2011.**

Sri. S.M. Savle, Section Officer of this office is permitted to retire from service on attaining the age of superannuation w.e.f. the afternoon of 31-05-2011 and he will be relieved of his duties in this office on the afternoon of 31-05-2011.

BY ORDER OF HON'BLE THE CHIEF JUSTICE,
**K. SOMASHEKAR,**
REGISTRAR (JUDICIAL)

**P.R. 700**

**NOTIFICATION**

**No. HCE. 430/2011, Bangalore, Dated 27th May, 2011.**

Sri. S.Y. Jyothrannavar, Section Officer of this office is permitted to retire from service on attaining the age of superannuation w.e.f. the afternoon of 31-05-2011 and he will be relieved of his duties in this office on the afternoon of 31-05-2011.

BY ORDER OF HON'BLE THE CHIEF JUSTICE,
**K. SOMASHEKAR,**
REGISTRAR (JUDICIAL)

**P.R. 701**

**NOTIFICATION**

**No. HCE. 425/2011, Bangalore, Dated 27th May, 2011.**

Smt. C. Chandramani, Section Officer of this office is permitted to retire from service on attaining the age of superannuation w.e.f. the afternoon of 31-05-2011 and she will be relieved of her duties in this office on the afternoon of 31-05-2011.

BY ORDER OF HON'BLE THE CHIEF JUSTICE,
**K. SOMASHEKAR,**
REGISTRAR (JUDICIAL)

**P.R. 702**

**NOTIFICATION**

**No. HCE. 427/2011, Bangalore, Dated 27th May, 2011.**

Sri. A. Kenchappa, Court Officer of this office is permitted to retire from service on attaining the age of superannuation w.e.f. the afternoon of 31-05-2011 and he will be relieved of his duties in this office on the afternoon of 31-05-2011.

BY ORDER OF HON'BLE THE CHIEF JUSTICE,
**K. SOMASHEKAR,**
REGISTRAR (JUDICIAL)

**P.R. 703**

**NOTIFICATION**

**No. HCE. 426/2011, Bangalore, Dated 27th May, 2011.**

Sri. Somashekaraiah, Section Officer of this office is permitted to retire from service on attaining the age of superannuation w.e.f. the afternoon of 31-05-2011 and he will be relieved of his duties in this office on the afternoon of 31-05-2011.

BY ORDER OF HON'BLE THE CHIEF JUSTICE,
**K. SOMASHEKAR,**
REGISTRAR (JUDICIAL)

**P.R. 704**

**NOTIFICATION**

**No. LCA-II. 11 (Rtmt)/2011, Bangalore, Dated 27th May, 2011.**

Sri. R.M. Ghamandi, Chief Administrative Officer, District and Sessions Court, Yadgir, is permitted to retire from service with effect from 31-05-2011, on attaining the age of superannuation, under Rule 95(1) of K.C.S. Rules.

BY ORDER,
**ASSISTANT REGISTRAR.**

**P.R. 705**

**NOTIFICATION**

**No. LCA-II. 11 (Rtmt)/2011, Bangalore, Dated 26th May, 2011.**

Sri. S.G. Inamdar, Chief Administrative Officer, Prl. District and Sessions Court, Bengaluru Rural District, Bengaluru, is permitted to retire from service with effect from 31-05-2011, on attaining the age of superannuation, under Rule 95(1) of K.C.S. Rules.

BY ORDER,
**ASSISTANT REGISTRAR.**

**P.R. 706**

## NOTIFICATION

**No. LCA-II. 11 (Rtmt)/2011, Bangalore, Dated 26th May, 2011.**

Sri. C.B. Desai, Chief Administrative Officer, Prl. District and Sessions Court, Davanagere, is permitted to retire from service with effect from 31-05-2011, on attaining the age of superannuation, under Rule 95(1) of K.C.S. Rules.

BY ORDER,

**P.R. 707** **ASSISTANT REGISTRAR.**

## NOTIFICATION

**No. LCA-II. 11 (Rtmt)/2011, Bangalore, Dated 27th May, 2011.**

Sri. M.R. Yargatti, Chief Administrative Officer, District and Sessions Court, Gadag, is permitted to retire from service with effect from 31-05-2011, on attaining the age of superannuation, under Rule 95(1) of K.C.S. Rules.

BY ORDER,

**P.R. 708** **ASSISTANT REGISTRAR.**

## NOTIFICATION

**No. LCA-II. 11 (Rtmt)/2011, Bangalore, Dated 27th May, 2011.**

Sri. H.T. Shivanna, Chief Administrative Officer, Prl. District and Sessions Court, Mandya, is permitted to retire from service with effect from 31-05-2011, on attaining the age of superannuation, under Rule 95(1) of K.C.S. Rules.

BY ORDER,

**P.R. 709** **ASSISTANT REGISTRAR.**

## FINANCE SECRETARIAT
## NOTIFICATION

**No. FD 35 BFC 2011, Bangalore, Dated 18th May, 2011.**

In Notification No. DPAR 247 SAS 2011 dated 13-05-2011 it has been ordered that Sri. Madan Gopal, IAS, Principal Secretary to Government, Education Department (Higher Education), Bangalore has been transferred and his services are placed at the disposal of Finance Department for being posted as Managing Director, Karnataka State Financial Corporation, Bangalore vice Dr. S.M. Jaamdar, IAS, transferred.

Accordingly, in exercise of the powers conferred under Section 17 (1) (a) of the State Financial Corporations (Amendment) Act 2000, the Government of Karnataka are pleased to appoint Sri. Madan Gopal, IAS, as Managing Director of Karnataka State Financial Corporation, Bangalore with immediate effect.

By Order and in the Name of the Governor of Karnataka,
**N. HEMARAJU,**
Deputy Secretary to Government, I/c.
(F.R. & BCC) Finance Department

**P.R. 710**

## ಆರ್ಥಿಕ ಸಚಿವಾಲಯ
## ಅಧಿಸೂಚನೆ

**ಸಂಖ್ಯೆ: ಆಇ 311 ರಾಲೆಪ 2010, ಬೆಂಗಳೂರು, ದಿನಾಂಕ: 09ನೇ ಮೇ, 2011.**

ಶ್ರೀ ಎಸ್.ಬಿ. ಮಾಸಲವಾಡ, ಲೆಕ್ಕಾಧೀಕ್ಷಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರಿಗೆ ಕರ್ನಾಟಕ ಸಿವಿಲ್ ಸೇವೆಗಳು (ವೇತನ, ಬಡ್ತಿ ಮತ್ತು ಪಿಂಚಣಿ ಕ್ರಮಬದ್ಧಗೊಳಿಸುವಿಕೆ) ನಿಯಮಗಳು 1978 ನಿಯಮ 2(1)(ಎ)ರ ಪ್ರಕಾರ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಕೆ.ಪಿ. ಶಂಕರನಾರಾಯಣ ಇವರು ಮುಂಬಡ್ತಿ ಮೇರೆಗೆ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ದಿನಾಂಕ : 23–07–2009ರಿಂದ ಜಾರಿಗೆ ಬರುವಂತೆ ಪೂರ್ವಾನ್ವಯವಾಗಿ ಲೆಕ್ಕಪರಿಶೋಧನಾಧಿಕಾರಿ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಿ ಕಾರ್ಯನಿರ್ವಾಹಕ ಅಧಿಕಾರಿಗಳ ಕಛೇರಿ, ತಾಲ್ಲೂಕು ಪಂಚಾಯತ್, ಹಾನಗಲ್ ಇಲ್ಲಿ ಖಾಲಿ ಇರುವ ಸಹಾಯಕ ಲೆಕ್ಕಾಧಿಕಾರಿ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ. (ಆಡಳಿತ ಮತ್ತು ಮುಂಗಡ)

**ಪಿ.ಆರ್. 711**

## ಅಧಿಸೂಚನೆ

**ಸಂಖ್ಯೆ: ಆಇ 291 ವಾತೆಸಿ 2010, ಬೆಂಗಳೂರು, ದಿನಾಂಕ: 20ನೇ ಮೇ, 2011.**

ಶ್ರೀ ಎಂ.ಡಿ. ಜೈನ್, ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕರ್ನಾಟಕ ಮೇಲ್ಮನವಿಗಳ ನ್ಯಾಯಾಧೀಕರಣ), ಬೆಂಗಳೂರು, ಇವರನ್ನು ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ (ಕಾನೂನು ವ್ಯವಹಾರಗಳು), ಬೆಂಗಳೂರು ಇಲ್ಲಿನ ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಿದ ದಿನಾಂಕ : 13–04–2011ರ ಅಧಿಸೂಚನೆ ಸಂಖ್ಯೆ : ಆಇ 291 ವಾತೆಸಿ 2010 (ಭಾಗ–2)ರ ಕ್ರಮ ಸಂಖ್ಯೆ : 2ರ ಆದೇಶವನ್ನು ದಿನಾಂಕ : 31–08–2011ರವರೆಗೆ ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಹೆಚ್.ಎಸ್. ಇಸ್ಮತುಲ್ಲಾಖಾನ್, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಮೌಲ್ಯವರ್ಧಿತ ತೆರಿಗೆ, ಸರಕು ಮತ್ತು ಸೇವಾ ತೆರಿಗೆ), ಬೆಂಗಳೂರು, ಇವರಿಗೆ ಬಡ್ತಿ ಮೇಲೆ ಅಪರ ಆಯುಕ್ತರು (ಕರ್ನಾಟಕ ಮೇಲ್ಮನವಿಗಳ ನ್ಯಾಯಾಧೀಕರಣ), ಬೆಂಗಳೂರು, ಶ್ರೀ ಎಂ.ಡಿ. ಜೈನ್, ಇವರ ವರ್ಗಾವಣೆಯಿಂದ ತೆರವಾಗುವ ಹುದ್ದೆಗೆ ನೇಮಿಸಿದ ದಿನಾಂಕ : 13–04–2011ರ ಅಧಿಸೂಚನೆ ಸಂಖ್ಯೆ : ಆಇ 291 ವಾತೆಸಿ 2010ರ (ಭಾಗ–I) ಕ್ರಮ ಸಂಖ್ಯೆ : 1ರ ಆದೇಶವನ್ನು ಸಹ ದಿನಾಂಕ : 31–08–2011ರವರೆಗೆ ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಹೆಚ್.ಎಸ್. ಇಸ್ಮತುಲ್ಲಾಖಾನ್, ವಾಣಿಜ್ಯ ತೆರಿಗೆ ಅಪರ ಆಯುಕ್ತರು, ಇವರನ್ನು ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ (ಕಾನೂನು ವ್ಯವಹಾರಗಳು), ಬೆಂಗಳೂರು, ಇಲ್ಲಿನ ಖಾಲಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ದಿನಾಂಕ : 31–08–2011ರವರೆಗೆ ನೇಮಿಸಿದೆ. ಆನಂತರ ದಿನಾಂಕ : 01–09–2011ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ದಿನಾಂಕ : 13–04–2011ರ ಅಧಿಸೂಚನೆಯಂತೆ ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕರ್ನಾಟಕ ಮೇಲ್ಮನವಿಗಳ ನ್ಯಾಯಾಧೀಕರಣ), ಬೆಂಗಳೂರು, ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಆರ್. ಚಂದ್ರಶೇಖರಾರಾಧ್ಯ,**

ಪೀಠಾಧಿಕಾರಿ,

ಆರ್ಥಿಕ ಇಲಾಖೆ. (ವಾಣಿಜ್ಯ ತೆರಿಗೆ–2).

**ಪಿ.ಆರ್. 712**

## ಅಧಿಸೂಚನೆ

**ಸಂಖ್ಯೆ: ಎಫ್‌ಡಿ 98 ಇಪಿಎಸ್ 2010, ಬೆಂಗಳೂರು, ದಿನಾಂಕ: 11ನೇ ಮೇ, 2011.**

ರಾಜ್ಯ ಅಬಕಾರಿ ಸೇವೆಗೆ ಸೇರಿದ ಈ ಕೆಳಕಂಡ ಅಬಕಾರಿ ಉಪ ಆಯುಕ್ತರುಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವೇತನ ಶ್ರೇಣಿ ₹. 22125–525–22650–600–26250–675–30300ರ ಅಬಕಾರಿ ಜಂಟಿ ಆಯುಕ್ತರ ವೃಂದಕ್ಕೆ ಸ್ಥಾನಪನ್ನ ಮುಂಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಲ್ಲಿ ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು, ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಹುದ್ದೆ ಮತ್ತು ಸ್ಥಳ | ಸ್ಥಾನಪನ್ನ ಮುಂಬಡ್ತಿ ನೀಡಿ ನೇಮಿಸಿರುವ ಹುದ್ದೆ ಮತ್ತು ಸ್ಥಳ |
|---|---|---|
| 1. | ಶ್ರೀ ಎಸ್.ಎಂ. ಯಮಕನಮರಡಿ, ಅಬಕಾರಿ ಉಪ ಆಯುಕ್ತರು, ಬಿಜಾಪುರ ಜಿಲ್ಲೆ | ಅಬಕಾರಿ ಜಂಟಿ ಆಯುಕ್ತರು, ಬೆಳಗಾವಿ ವಿಭಾಗ (ಜಾರಿ ಮತ್ತು ತನಿಖೆ) (ಶ್ರೀ ಎಂ. ಪ್ರಭುಸ್ವಾಮಿ ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ) |
| 2. | ಶ್ರೀ ಕೆ.ಸಿ. ಹರಿದಾಸ್, ಅಬಕಾರಿ ಉಪ ಆಯುಕ್ತರು, ಅಬಕಾರಿ ಆಯುಕ್ತರ ಕಛೇರಿ, ಬೆಂಗಳೂರು | ಅಬಕಾರಿ ಜಂಟಿ ಆಯುಕ್ತರು, ಮಂಗಳೂರು ವಿಭಾಗ (ಜಾರಿ ಮತ್ತು ತನಿಖೆ) (ಶ್ರೀ ಕೆ. ಭೀಮಪ್ಪ ಇವರ ವಯೋ ನಿವೃತ್ತಿಯಿಂದ ತೆರವಾದ ಹುದ್ದೆಗೆ) |

ರಾಜ್ಯ ಅಬಕಾರಿ ಸೇವೆಗೆ ಸೇರಿದ ಈ ಕೆಳಕಂಡ ಅಬಕಾರಿ ಜಂಟಿ ಆಯುಕ್ತರುಗಳನ್ನು ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ವರ್ಗಾಯಿಸಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು, ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳ | ವರ್ಗಾಯಿಸಿ ನೇಮಿಸಲಾದ ಸ್ಥಳ |
|---|---|---|
| 1. | ಶ್ರೀ ಎಂ. ವಿಶ್ವರೂಪ್, ಅಬಕಾರಿ ಜಂಟಿ ಆಯುಕ್ತರು, ಗುಲ್ಬರ್ಗಾ ವಿಭಾಗ (ಜಾರಿ ಮತ್ತು ತನಿಖೆ) | ಅಬಕಾರಿ ಜಂಟಿ ಆಯುಕ್ತರು, (ಜಾರಿ ಮತ್ತು ತನಿಖೆ) ಮೈಸೂರು ವಿಭಾಗ, ಮೈಸೂರು, (ಖಾಲಿ ಹುದ್ದೆಯಲ್ಲಿ) |
| 2. | ಶ್ರೀ ಎಂ. ಪ್ರಭುಸ್ವಾಮಿ, ಅಬಕಾರಿ ಜಂಟಿ ಆಯುಕ್ತರು, (ಜಾರಿ ಮತ್ತು ತನಿಖೆ) ಬೆಳಗಾವಿ ವಿಭಾಗ | ಅಬಕಾರಿ ಜಂಟಿ ಆಯುಕ್ತರು, (ಜಾರಿ ಮತ್ತು ತನಿಖೆ) ಗುಲ್ಬರ್ಗಾ ವಿಭಾಗ, (ಶ್ರೀ ಎಂ. ವಿಶ್ವರೂಪ್ ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ. (ಅಬಕಾರಿ).

**ಪಿ.ಆರ್. 713**

## ಅಧಿಸೂಚನೆ

**ಸಂಖ್ಯೆ: ಎಫ್‌ಡಿ 128 ಇಪಿಎಸ್ 2010, ಬೆಂಗಳೂರು, ದಿನಾಂಕ: 11ನೇ ಮೇ, 2011.**

ರಾಜ್ಯ ಅಬಕಾರಿ ಸೇವೆಗೆ ಸೇರಿದ ಈ ಕೆಳಕಂಡ ಅಬಕಾರಿ ಉಪ ಆಯುಕ್ತರುಗಳನ್ನು ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ವರ್ಗಾಯಿಸಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು, ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳ | ವರ್ಗಾಯಿಸಿ ನೇಮಿಸಲಾದ ಸ್ಥಳ |
|---|---|---|
| 1. | ಶ್ರೀ ಎಂ. ಎನ್. ಲಕ್ಷ್ಮೀನರಸಿಂಹಯ್ಯ, ಬೆಂಗಳೂರು ನಗರ ಜಿಲ್ಲೆ (ಉತ್ತರ) | ಅಬಕಾರಿ ಉಪ ಆಯುಕ್ತರು, (ಕಾನೂನು) ಅಬಕಾರಿ ಆಯುಕ್ತರ ಕಛೇರಿ, ಬೆಂಗಳೂರು (ಖಾಲಿ ಹುದ್ದೆಗೆ) |
| 2. | ಶ್ರೀ ಟಿ.ಆರ್. ಜಯಸಿಂಹ, ಕೋಲಾರ ಜಿಲ್ಲೆ | ಶ್ರೀ ಎಂ. ಎನ್. ಲಕ್ಷ್ಮೀನರಸಿಂಹಯ್ಯ, ಬೆಂಗಳೂರು ನಗರ ಜಿಲ್ಲೆ (ಉತ್ತರ) ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ |
| 3. | ಶ್ರೀ ಸೋಮಶೇಖರಪ್ಪ, ರಾಯಚೂರು ಜಿಲ್ಲೆ | ಅಬಕಾರಿ ಉಪ ಆಯುಕ್ತರು, ಬೆಳಗಾವಿ ಜಿಲ್ಲೆ ಇಲ್ಲಿ ಖಾಲಿ ಇರುವ ಹುದ್ದೆಗೆ |
| 4. | ಶ್ರೀ ಎ.ಎಸ್. ಮಂಗಾಣಿ, ತುಮಕೂರು ಜಿಲ್ಲೆ | ಶ್ರೀ ಸೋಮಶೇಖರಪ್ಪ, ರಾಯಚೂರು ಜಿಲ್ಲೆ ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ |
| 5. | ಶ್ರೀ ಬಿ.ವಿ. ಹೂವಪ್ಪಗೌಡ, ದಕ್ಷಿಣ ಕನ್ನಡ ಜಿಲ್ಲೆ | ಶ್ರೀ ಎ.ಎಸ್. ಮಂಗಾಣಿ, ತುಮಕೂರು ಜಿಲ್ಲೆ ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ |

ಸರ್ಕಾರದ ಅಧಿಸೂಚನೆ ಸಂಖ್ಯೆ : ಆಇ 07 ಇಪಿಎಸ್ 2011, ದಿನಾಂಕ : 04–02–2011ರ ಅಧಿಸೂಚನೆಯಲ್ಲಿ ಶ್ರೀ ವೈ. ಮಂಜುನಾಥ್, ಅಬಕಾರಿ ಉಪ ಆಯುಕ್ತರು, ಮೈಸೂರು ಜಿಲ್ಲೆ ಇವರನ್ನು ಕೊಪ್ಪಳ ಜಿಲ್ಲೆಯ ಅಬಕಾರಿ ಉಪ ಆಯುಕ್ತರ ಹುದ್ದೆಗೂ ಹಾಗೂ ಶ್ರೀ ಮಹಮ್ಮದ್ ಫಸೀಯುದ್ದೀನ್, ಅಬಕಾರಿ ಉಪ ಆಯುಕ್ತರು, ಬೆಂಗಳೂರು ನಗರ ಜಿಲ್ಲೆ (ಪಶ್ಚಿಮ) ಇವರನ್ನು ಮೈಸೂರು ಜಿಲ್ಲೆಗೆ ವರ್ಗಾಯಿಸಿದ್ದು, ಆಡಳಿತಾತ್ಮಕ ಹಿತದೃಷ್ಟಿಯಿಂದ ಸದರಿ ಅಧಿಸೂಚನೆಯನ್ನು ರದ್ದುಪಡಿಸಿ ಉಭಯ ಅಧಿಕಾರಿಗಳನ್ನು ಮೂಲ ಸ್ಥಳದಲ್ಲಿಯೇ ಅಬಕಾರಿ ಉಪ ಆಯುಕ್ತರ ಹುದ್ದೆಯಲ್ಲಿ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ. (ಅಬಕಾರಿ).

**ಪಿ.ಆರ್. 714**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಅಪಜೀ 31 ಎಫ್‌ಪಿಸಿ 2010, ಬೆಂಗಳೂರು, ದಿನಾಂಕ: 12ನೇ ಮೇ, 2011**

ಶ್ರೀ ವಿ. ಪೊನ್ನುರಾಜ್, ಭಾ.ಆ.ಸೇ., ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಇವರನ್ನು ಮೈಸೂರು ಮ್ಯಾಚ್ ಕಂಪನಿ ಲಿ., ಶಿವಮೊಗ್ಗ, ಇದರ ಆಡಳಿತ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಪಿ. ರಾಮಕೃಷ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಪಿ.ಆರ್. 715**

## ಕಂದಾಯ ಸಚಿವಾಲಯ

### <u>ಸೇರ್ಪಡೆ</u>

**ಸಂಖ್ಯೆ: ಕಂಇ 160 ಎಎಸ್‌ಡಿ 2011, ಬೆಂಗಳೂರು, ದಿನಾಂಕ: 24ನೇ ಮೇ, 2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 639 ಎಎಸ್‌ಡಿ 2010, ದಿ: 29–11–2010ರಲ್ಲಿ ಈ ಕೆಳಕಂಡ ಸಾಲುಗಳನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

"ಶ್ರೀ ಇ.ಡಿ. ಭೃಂಗಿ ರವರಿಗಿಂತ ನಿಕಟಪೂರ್ವ ಜೇಷ್ಠತೆಯಲ್ಲಿ ಶ್ರೀ ಡಿ. ಪುಟ್ಟೇಗೌಡ, ಶಿರಸ್ತೇದಾರ್ (ಜೇಷ್ಠತಾ ಕ್ರಮ–ಸಂಖ್ಯೆ:51) ರವರು ಕಿರಿಯರಾಗಿರುತ್ತಾರೆ. ಇವರಿಗೆ ಸ್ಥಾನಪನ್ನ ಬಡ್ತಿ ನೀಡಲಾಗಿದ್ದು ಅದರಂತೆ ಶ್ರೀ ಡಿ. ಪುಟ್ಟೇಗೌಡರವರು ಸ್ಥಳನಿಯುಕ್ತಿಗೊಳಿಸಿದ ಹುದ್ದೆಯಲ್ಲಿ ದಿ: 01–02–2008ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

**ಪಿ.ಆರ್. 716**

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾಪ್ರ 36 ಪ್ರವಾನಿ 2011, ಬೆಂಗಳೂರು, ದಿನಾಂಕ: 27ನೇ ಮೇ, 2011**

ಶ್ರೀ ಎನ್. ಸಿ. ಮುನಿಯಪ್ಪ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ ಇವರನ್ನು ಅರಣ್ಯ ವಸತಿ ಮತ್ತು ವಿಹಾರಧಾಮಗಳ ಸಂಸ್ಥೆಯ ನಿರ್ದೇಶಕರ ಮಂಡಳಿಗೆ ಶ್ರೀ ಕೆ. ಜೋತಿರಾಮಲಿಂಗಂ, ಭಾ.ಆ.ಸೇ., ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾರಾಯಣಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

**ಪಿ.ಆರ್. 717**

### ಅಧಿಸೂಚನೆ

**ಸಂಖ್ಯೆ: ಕಸಂವಾಪ್ರ 37 ಪ್ರವಾನಿ 2011, ಬೆಂಗಳೂರು, ದಿನಾಂಕ: 27ನೇ ಮೇ, 2011**

ಶ್ರೀ ಎನ್. ಸಿ. ಮುನಿಯಪ್ಪ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ ಇವರನ್ನು ತಾಜ್ ಕರ್ನಾಟಕ ಹೋಟೆಲ್ ಅಂಡ್ ರೆಸಾರ್ಟ್ಸ್ ಲಿಮಿಟೆಡ್‌ನ ನಿರ್ದೇಶಕರ ಮಂಡಳಿಗೆ ಶ್ರೀ ಕೆ. ಜೋತಿರಾಮಲಿಂಗಂ, ಭಾ.ಆ.ಸೇ., ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾರಾಯಣಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

**ಪಿ.ಆರ್. 718**

### ಅಧಿಸೂಚನೆ

**ಸಂಖ್ಯೆ: ಕಸಂವಾಪ್ರ 35 ಪ್ರವಾನಿ 2011, ಬೆಂಗಳೂರು, ದಿನಾಂಕ: 27ನೇ ಮೇ, 2011**

ಶ್ರೀ ಎನ್. ಸಿ. ಮುನಿಯಪ್ಪ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ ಇವರನ್ನು ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಗೆ ಶ್ರೀ ಕೆ. ಜೋತಿರಾಮಲಿಂಗಂ, ಭಾ.ಆ.ಸೇ., ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾರಾಯಣಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

**ಪಿ.ಆರ್. 719**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 06 ಆಸೇವ 2011, ಬೆಂಗಳೂರು, ದಿನಾಂಕ: 27ನೇ ಮೇ, 2011**

ಶ್ರೀ ಎಂ. ಶ್ರೀರಾಮರೆಡ್ಡಿ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಸಹಾಯಕ ಯೋಜನಾಧಿಕಾರಿ, ಡಿ.ಆರ್.ಡಿ.ಎ., ಬೆಂಗಳೂರು ನಗರ ಜಿಲ್ಲಾ ಪಂಚಾಯತ್, ಬೆಂಗಳೂರು ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು-ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು-2)

**ಪಿ.ಆರ್. 720**

### ಅಧಿಸೂಚನೆ

**ಸಂಖ್ಯೆ: ಸಿಆಸುಇ 59 ಆಸೇವ 2011, ಬೆಂಗಳೂರು, ದಿನಾಂಕ: 28ನೇ ಮೇ, 2011**

ಶ್ರೀ ಮಲ್ಲೇಶಯ್ಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ವಿಶೇಷ ಭೂಸ್ವಾಧೀನಾಧಿಕಾರಿ, ಭಾರತ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ (NHAI) ಕುಣಿಗಲ್, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷ ಜಿಲ್ಲಾಧಿಕಾರಿ (ಭೂಸ್ವಾಧೀನ ಮತ್ತು ಸಂಯೋಜನೆ/ Liaison) ರೈಲ್ವೆ ಇಲಾಖೆ, ಭಾರತ ಸರ್ಕಾರ, ಬೆಂಗಳೂರು ಹುದ್ದೆಗೆ ನಿಯೋಜನೆ ಮೇಲೆ ನೇಮಿಸಿದೆ.

ಹಾಗೂ ಶ್ರೀ ಮಲ್ಲೇಶಯ್ಯ, ಕೆ.ಎ.ಎಸ್. ಹಿರಿಯ ಶ್ರೇಣಿ ಅಧಿಕಾರಿ, ಇವರನ್ನು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ವಿಶೇಷ ಭೂಸ್ವಾಧೀನಾಧಿಕಾರಿ, ಭಾರತ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ (NHAI) ಕುಣಿಗಲ್, ಹುದ್ದೆಯಲ್ಲಿ ಮುಂದಿನ ಆದೇಶದವರೆಗೆ ಹೆಚ್ಚುವರಿ ಪ್ರಭಾರದಲ್ಲಿರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು–2)

**ಪಿ.ಆರ್. 721**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 286 ಆಸೇವ 2010, ಬೆಂಗಳೂರು, ದಿನಾಂಕ: 28ನೇ ಮೇ, 2011**

ಶ್ರೀ ಡಿ. ಪಿ. ವೆಂಕಟೇಶ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ವಿಶೇಷ ಭೂಸ್ವಾಧೀನಾಧಿಕಾರಿ, ರಾಮನಗರ, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷ ಭೂಸ್ವಾಧೀನಾಧಿಕಾರಿ, ಹೇಮಾವತಿ ನೀರಾವರಿ ಯೋಜನೆ, ನಾಗಮಂಗಲ, ಮಂಡ್ಯ ಜಿಲ್ಲೆ–ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು–2)

**ಪಿ.ಆರ್. 722**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 282 ಆಸೇವ 2010, ಬೆಂಗಳೂರು, ದಿನಾಂಕ: 28ನೇ ಮೇ, 2011**

ಶ್ರೀ ಬಿ. ಶಿವಯ್ಯ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ವಿಶೇಷ ಭೂಸ್ವಾಧೀನಾಧಿಕಾರಿ, ಹೇಮಾವತಿ ಜಲಾಶಯ ಯೋಜನೆ (ಪುನರ್ವಸತಿ ವಿಭಾಗ), ಹಾಸನ, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷ ಭೂಸ್ವಾಧೀನಾಧಿಕಾರಿ, 2ನೇ ವಿಭಾಗ (ಹೆಚ್.ಆರ್.ಪಿ–2), ಹೇಮಾವತಿ ಜಲಾಶಯ ಯೋಜನೆ, ಹಾಸನ–ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಶ್ರೀ ಬಿ. ಶಿವಯ್ಯ, ಕೆ.ಎ.ಎಸ್. (ಕಿರಿಯ ಶ್ರೇಣಿ), ಇವರನ್ನು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ವಿಶೇಷ ಭೂಸ್ವಾಧೀನಾಧಿಕಾರಿ, ಹೇಮಾವತಿ ಜಲಾಶಯ ಯೋಜನೆ (ಪುನರ್ವಸತಿ ವಿಭಾಗ), ಹಾಸನ, ಹುದ್ದೆಯಲ್ಲಿ ಮುಂದಿನ ಆದೇಶದವರೆಗೆ ಹೆಚ್ಚುವರಿ ಪ್ರಭಾರದಲ್ಲಿರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು–2)

**ಪಿ.ಆರ್. 723**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 68 ಆಸೇವ 2011, ಬೆಂಗಳೂರು, ದಿನಾಂಕ: 28ನೇ ಮೇ, 2011**

ಶ್ರೀ ಕರೀಗೌಡ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ವಿಶೇಷ ಭೂಸ್ವಾಧೀನಾಧಿಕಾರಿ, ಭಾರತ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ (NHAI), ಹೊಸಪೇಟೆ, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಹಾಯಕ ಆಯುಕ್ತರು, ಭೂಮಿ ಮಾನಿಟರಿಂಗ್ ಸೆಲ್, ಕಂದಾಯ ಇಲಾಖೆ, ಬೆಂಗಳೂರು–ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು–2)

**ಪಿ.ಆರ್. 724**

**ಅಧಿಸೂಚನೆ**

**ಸಂಖ್ಯೆ: ಡಿಪಿಎಆರ್ 120 ಎಸ್‌ಪಿಎಸ್ 2011, ಬೆಂಗಳೂರು, ದಿನಾಂಕ: 01ನೇ ಜೂನ್, 2011**

**ಶ್ರೀ ಸಯ್ಯದ್ ಉಲ್ಫತ್ ಹುಸೈನ್, ಐಪಿಎಸ್** (ಕೆಎನ್–95), ಡಿಐಜಿಪಿ (ನೇಮಕಾತಿ ಮತ್ತು ತರಬೇತಿ), ಬೆಂಗಳೂರು ಇವರು ಯುನೈಟೆಡ್ ಕಿಂಗ್ ಡಮ್ (ಯುಕೆ)ದಲ್ಲಿ 4ನೇ ಹಂತದ ಮಿಡ್ ಕರೀರ್ ತರಬೇತಿಯನ್ನು ಪೂರೈಸಿದ ನಂತರ, ಇವರಿಗೆ ದಿನಾಂಕ: 11–07–2011 ರಿಂದ 16–07–2011ರವರೆಗೆ ಒಟ್ಟು 06 (ಆರು) ದಿನಗಳ ಎಕ್ಸ್–ಇಂಡಿಯಾ ಗಳಿಕೆ ರಜೆಯನ್ನು (Ex-India Earned Leave) ವೈಯಕ್ತಿಕ ಕಾರಣಗಳ ಹಿನ್ನೆಲೆಯಲ್ಲಿ ಮಂಜೂರು ಮಾಡಿದೆ.

ಆ ಸಂದರ್ಭದಲ್ಲಿ ದಿನಾಂಕ 09–07–2011 ಮತ್ತು 10–07–2011ರ ಹಾಗೂ ದಿನಾಂಕ 17–07–2011ರ ಸಾರ್ವತ್ರಿಕ ರಜೆಗಳನ್ನು Ex-India ಗಳಿಕೆ ರಜೆಗೆ ಹೊಂದಿಸಿಕೊಂಡು (Prefix & Suffix) ಉಪಯೋಗಿಸಿಕೊಳ್ಳಲು ಸಹ ಅನುಮತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಶೋಕ್ ಪಿ. ಅತ್ರೆ,**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 725** ಸಿ.ಆ.ಸು. ಇಲಾಖೆ (ಸೇವೆಗಳು–4)

## ಅಧಿಸೂಚನೆ

**ಸಂಖ್ಯೆ: ಸಿಆಸುಇ 267 ಸಅಸೇ 2011, ಬೆಂಗಳೂರು, ದಿನಾಂಕ: 01ನೇ ಜೂನ್, 2011**

ಅಧಿಸೂಚನೆ ಸಂಖ್ಯೆ ಪಿಡಿ 120 ಎಸ್‌ಎಸ್‌ಎಂ 2010, ದಿನಾಂಕ 04–05–2011ರಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಈ ಕೆಳಕಂಡ ಅಧಿಕಾರಿಗಳಿಗೆ ಬಡ್ತಿ ನೀಡಿ ಅವರನ್ನು ವರ್ಗಾಯಿಸಿ ನೇಮಿಸಲು ಅವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ವಶಕ್ಕೆ ನೀಡಲಾಗಿದೆ. ಇದರನ್ವಯ ಇವರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ಹೆಸರಿನ ಮುಂದೆ ನಮೂದಿಸಿರುವ ಹುದ್ದೆಗೆ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ:

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ | ಮರು ಸ್ಥಳನಿಯುಕ್ತಿಗೊಳಿಸಲಾದ ಹುದ್ದೆ |
|---|---|---|
| 1 | **ಶ್ರೀ ಕೆ. ಲಕ್ಷ್ಮೀಪತಿ,** ಜಂಟಿ ನಿರ್ದೇಶಕರು (ಯೋಜನೆ) ನಗರಾಭಿವೃದ್ಧಿ ಇಲಾಖೆ | ನಿರ್ದೇಶಕರು, ಮಾನವ ಶಕ್ತಿ ಮತ್ತು ಉದ್ಯೋಗ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ– ಶ್ರೀ ಬಿ. ಆರ್. ಪ್ರಕಾಶ್ ಇವರ ವಯೋನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ |
| 2 | **ಶ್ರೀಮತಿ ಎಂ. ಆರ್. ಪದ್ಮಜ,** ಉಪನಿರ್ದೇಶಕರು, ಸಂಪೂರ್ಣ ಯೋಜನಾ ವಿಭಾಗ, ಯೋಜನಾ ಇಲಾಖೆ | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಲ್ಲಿ ಜಂಟಿ ನಿರ್ದೇಶಕರ ಹುದ್ದೆಯಲ್ಲಿ ವರದಿ ಮಾಡಿಕೊಂಡ ನಂತರ ಮರುದಿನದಿಂದ ಜಂಟಿ ನಿರ್ದೇಶಕರು (ಯೋಜನೆ), ನಗರಾಭಿವೃದ್ಧಿ ಇಲಾಖೆ, ಶ್ರೀ ಕೆ. ಲಕ್ಷ್ಮೀಪತಿ, ಜಂಟಿ ನಿರ್ದೇಶಕರು ಇವರ ಮುಂಬಡ್ತಿಯಿಂದ ತೆರವಾದ ಸ್ಥಾನದಲ್ಲಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಆರ್. ವಿಜಯಾನಂದ ಶರ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 726** ಸಿ.ಆ.ಸು. ಇಲಾಖೆ (ಸೇವೆಗಳು–3)

## ಅಧಿಸೂಚನೆ

**ಸಂಖ್ಯೆ: ಸಿಆಸುಇ 90 ಆಸೇವ 2011, ಬೆಂಗಳೂರು, ದಿನಾಂಕ: 01ನೇ ಜೂನ್, 2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 90 ಆಸೇವ 2011 ದಿನಾಂಕ: 27–05–2011ರಲ್ಲಿ ಶ್ರೀ ಪಿ. ಎಸ್. ಕಾಂತರಾಜ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಉಪವಿಭಾಗಾಧಿಕಾರಿ, ಬೆಂಗಳೂರು ದಕ್ಷಿಣ ಉಪವಿಭಾಗ, ಬೆಂಗಳೂರು ಜಿಲ್ಲೆ, ಬೆಂಗಳೂರು ಹುದ್ದೆಗೆ ವರ್ಗಾಯಿಸಿರುವುದನ್ನು ರದ್ದುಪಡಿಸಿ, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು–ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 727** ಸಿ.ಆ.ಸು. ಇಲಾಖೆ (ಸೇವೆಗಳು–2)

## PERSONNEL AND ADMINISTRATIVE REFORMS SECRETARIAT

## NOTIFICATION

**NO. DPAR 48 SFP 2011, Bangalore, dated 01st June, 2011.**

**Shri O. Palaiah, IFS (KN-2002),** Deputy Conservator of Forests, Kundapur Division is transferred with immediate effect and posted until further orders as **Deputy Conservator of Forests, Mangalore Division, Mangalore** vice Shri Vijay Kumar, IFS (KN-2000) transferred.

By Order and in the Name of the Governor of Karnataka,

**A.P. ATRE,**

Under Secretary to Government

**P.R. 728** DP & AR (Services-IV)

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 20 ಎಟಿಎಸ್ 2011, ಬೆಂಗಳೂರು, ದಿನಾಂಕ: 01ನೇ ಜೂನ್, 2011.**

ಕಂದಾಯ ಇಲಾಖೆಯ ತಹಶೀಲ್ದಾರ್ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳನ್ನು ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಸ್ಥಳಗಳಿಗೆ ಸಾರ್ವಜನಿಕ/ಆಡಳಿತ ಹಿತದೃಷ್ಟಿಯಿಂದ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ತಹಶೀಲ್ದಾರರ ಹೆಸರು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಳ (ಶ್ರೀ/ಶ್ರೀಮತಿ) | ವರ್ಗಾಯಿಸಿ ನೇಮಿಸಿದ ಸ್ಥಳ |
|---|---|---|
| 1. | ಡಾ॥ ರವಿ ಎಂ. ತಿರ್ಲಾಪುರ್, ತಹಶೀಲ್ದಾರ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ | ತಹಶೀಲ್ದಾರ್, ರಾಮನಗರ ತಾಲ್ಲೂಕು, ರಾಮನಗರ ಜಿಲ್ಲೆ (ಶ್ರೀ ನಟೇಶ್ ಟಿ.ಪಿ. ಇವರ ಜಾಗದಲ್ಲಿ) |
| 2. | ವಿ. ಮಂಜುನಾಥ್, ವಿಶೇಷ ತಹಶೀಲ್ದಾರ್, ಕೆ.ಎಸ್.ಎಫ್.ಸಿ., ದಾವಣಗೆರೆ ಜಿಲ್ಲೆ | ತಹಶೀಲ್ದಾರ್, ಹೊಳೆನರಸೀಪುರ ತಾಲ್ಲೂಕು ಹಾಸನ ಜಿಲ್ಲೆ (ಶ್ರೀ ಎಸ್.ಆರ್. ಕೃಷ್ಣಯ್ಯ ಇವರ ಜಾಗದಲ್ಲಿ) |
| 3. | ಹೆಚ್. ಕೆ. ಗೀತಾ ಕೃಷ್ಣ, ಪುರಸಭಾ ತಹಶೀಲ್ದಾರ್, ಮೈಸೂರು | ತಹಶೀಲ್ದಾರ್, ಟೀ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ (ಶ್ರೀಮತಿ ಶೈಲಜಾ ವಿ. ಆರ್. ಇವರ ಜಾಗದಲ್ಲಿ) |
| 4. | ಶಿವಪ್ಪ ಲಮಾಣಿ, ಸ್ಥಳ ನಿರೀಕ್ಷಣೆಯಲ್ಲಿರುವ | ವಿಶೇಷ ತಹಶೀಲ್ದಾರ್, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ, (ಶ್ರೀಮತಿ ಉಷಾರಾಣಿ ಇವರ ಜಾಗದಲ್ಲಿ) |

ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ವರ್ಗಾವಣೆ ಹೊಂದಿದ ತಹಶೀಲ್ದಾರರುಗಳನ್ನು ಕೂಡಲೇ ಕರ್ತವ್ಯದಿಂದ ಬಿಡುಗಡೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಾಲಕೃಷ್ಣಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 729**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲಾ 126 ಎಲ್‌ಸಿಇ 2010, ಬೆಂಗಳೂರು, ದಿನಾಂಕ: 02ನೇ ಜೂನ್, 2011.**

1. ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳ 1977ರ ನಿಯಮ 5(7)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್. ಶರವಣ, ವಿಶೇಷ ಸರ್ಕಾರಿ ಅಭಿಯೋಜಕರು, 12ನೇ ತ್ವರಿತಗತಿ ನ್ಯಾಯಾಲಯ, ಬೆಂಗಳೂರು ಇವರ ರಾಜೀನಾಮೆಯನ್ನು ದಿನಾಂಕ: 31–05–2011ರಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ.

2. ಇವರ ರಾಜೀನಾಮೆಯಿಂದ ತೆರವಾದ ಸ್ಥಾನದಲ್ಲಿ ಹೊಸದಾಗಿ ನೇಮಕಾತಿ ಮಾಡುವವರೆಗೆ ಬೆಂಗಳೂರಿನ 1ನೇ ತ್ವರಿತಗತಿ ನ್ಯಾಯಾಲಯದ ವಿಶೇಷ ಸರ್ಕಾರಿ ಅಭಿಯೋಜಕರಾದ ಶ್ರೀ ಎಸ್. ಆರ್. ಕಿಣಗಿ ಇವರನ್ನು ಹೆಚ್ಚಿನ ಪ್ರಭಾರದಲ್ಲಿ ಕಾರ್ಯನಿರ್ವಹಿಸಲು ನೇಮಿಸಲಾಗಿದೆ. ನಿರ್ವಹಿಸಿದ ಪ್ರಕರಣಗಳಿಗೆ ಸಂಬಂಧಿಸಿದಂತೆ ನಿಯಮಾನುಸಾರ ಸಂಭಾವನೆ (ರಿಟೇನರ್ ಫೀ ಹೊರತುಪಡಿಸಿ) ಪಡೆಯಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಪಿ.ಆರ್. 730**

## PERSONNEL AND ADMINISTRATIVE REFORMS SECRETARIAT

### ADDENDUM

**No. DPAR 65 SKT 2011, Bangalore, Dated 03rd June, 2011.**

The orders of posting of Sri A. Marigowda, KAS (Junior Scale) Officer (Waiting for Posting) as Special Land Acquisition Officer and Competent Authority, LPG, Hindustan Petrolium Ltd., Bangalore, in Notification No. DPAR 65 SKT 2011 dated: 02-06-2011 shall come in to effect after the on going Karnataka Legislative Session is concluded.

By Order and in the Name of the Governor of Karnataka,
**M. VASUDEVA MURTHY,**
Under Secretary to Government,
DP & AR (Services-2)

**P.R. 731**

**NOTIFICATION**

**No. DPAR 43 SFS 2011, Bangalore, Dated 03rd June, 2011.**

Sri D. Yatish Kumar, SFS, Deputy Conservator of Forests, under orders of transfer from the post of Deputy Conservator of Forests, Wildlife Division, Mysore vide Government Notification No. DPAR 43 SFP 2011, dated 09-05-2011 is posted as Deputy Conservator of Forests, Sirsi Territorial Division, Sirsi vice Sri Manoj Kumar, IFS (KN-97) transferred.

As per Government Order No. DPAR 12 STR 2011, dated 31-05-2011, the transfers ordered in this Notification shall take effect only after the current Legislature Session is over.

By Order and in the Name of the Governor of Karnataka,
**ASHOK.P.ATRE,**
Under Secretary to Government,
DP & AR (Services-4)

**P.R. 732**

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 65 ಆಸೇವ 2011, ಬೆಂಗಳೂರು, ದಿನಾಂಕ: 02ನೇ ಜೂನ್, 2011.**

ಶ್ರೀ ಕಾಶೀನಾಥ್ ಪವಾರ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, (ನೇಮಕಾತಿ ನಿರೀಕ್ಷಣೆಯಲ್ಲಿ) ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಮಾನ್ಯ ಪಶುಸಂಗೋಪನಾ, ಲೋಕಶಿಕ್ಷಣ, ಗ್ರಂಥಾಲಯ, ಸಣ್ಣ ಉಳಿತಾಯ ಮತ್ತು ಲಾಟರಿ ಸಚಿವರ ಆಪ್ತ ಕಾರ್ಯದರ್ಶಿಯಾಗಿ ಮುಂದಿನ ಆದೇಶದವರೆಗೆ ಅಥವಾ ಮಾನ್ಯ ಸಚಿವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 733**

**ಅಡೆಂಡಮ್**

**ಸಂಖ್ಯೆ: ಸಿಆಸುಇ 65 ಆಸೇವ 2011, ಬೆಂಗಳೂರು, ದಿನಾಂಕ: 03ನೇ ಜೂನ್, 2011.**

ಅಧಿಸೂಚನೆ ಸಂಖ್ಯೆ: ಸಿಆಸುಇ 65 ಆಸೇವ 2011 ದಿನಾಂಕ: 03–06–2011ರಲ್ಲಿ ಶ್ರೀ ಕಾಶೀನಾಥ್ ಪವಾರ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, (ನೇಮಕಾತಿ ನಿರೀಕ್ಷಣೆಯಲ್ಲಿ) ಇವರನ್ನು ಮಾನ್ಯ ಪಶುಸಂಗೋಪನಾ, ಲೋಕಶಿಕ್ಷಣ, ಗ್ರಂಥಾಲಯ, ಸಣ್ಣ ಉಳಿತಾಯ ಮತ್ತು ಲಾಟರಿ ಸಚಿವರ ಆಪ್ತ ಕಾರ್ಯದರ್ಶಿಯಾಗಿ ನೇಮಿಸಿರುವ ಆದೇಶವು ಪ್ರಸ್ತುತ ನಡೆಯುತ್ತಿರುವ ಕರ್ನಾಟಕ ವಿಧಾನ ಮಂಡಲದ ಅಧಿವೇಶನವು ಮುಗಿದ ನಂತರ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 734**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 89 ಆಸೇವ 2011, ಬೆಂಗಳೂರು, ದಿನಾಂಕ: 01ನೇ ಜೂನ್, 2011.**

ಡಾ॥ ವಿಜಯಕುಮಾರ್ ಎನ್. ತೋರಗಲ್, ಕೆ.ಎ.ಎಸ್. (ಹಿರಿಯಶ್ರೇಣಿ) ಅಧಿಕಾರಿ, ಪ್ರಸ್ತುತ ಅಪರ ಆಯುಕ್ತರು (ಭೂ ನಿರ್ವಹಣೆ ಯೋಜನೆ ಮತ್ತು ಇತರೆ), ಪ್ರಾದೇಶಿಕ ಆಯುಕ್ತರ ಕಛೇರಿ, ಬೆಳಗಾಂ ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಮಾನ್ಯ ಕಂದಾಯ ಸಚಿವರ ಆಪ್ತ ಕಾರ್ಯದರ್ಶಿಯಾಗಿ ಮುಂದಿನ ಆದೇಶದವರೆಗೆ ಅಥವಾ ಮಾನ್ಯ ಸಚಿವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 735**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 126 ಸೇಇಮು 2011, ಬೆಂಗಳೂರು, ದಿನಾಂಕ: 01ನೇ ಜೂನ್, 2011.**

ಶ್ರೀ ಎಂ. ಕದಿರವೇಲು, ಸಹ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವೇತನ ಶ್ರೇಣಿ ₹. 24450–600–25250–675–30300–750–31800ರ ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ, ಈ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ. ಆರ್. ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಪಿ.ಆರ್. 736**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 76 ಸೇಲೋಯು 2011, ಬೆಂಗಳೂರು, ದಿನಾಂಕ: 04ನೇ ಜೂನ್, 2011.**

ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಎನ್. ಎಸ್. ನೇಗಿನಾಳ್ ಮತ್ತು ಶ್ರೀ ಸುರೇಶ್ ಬಿ. ತುರಮುರಿ ಇವರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಎರಡು ಅಪರ ನಿಬಂಧಕರ (ವಿಚಾರಣೆಗಳು) ಹುದ್ದೆಗಳಿಗೆ, ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15 (1) (ಎ)ರನ್ವಯ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಲಾಗಿದೆ.

ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಮಾರ್ಕಂಡೇಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2)

**ಪಿ.ಆರ್. 737**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 68 ಸೇಲೋಯು 2011, ಬೆಂಗಳೂರು, ದಿನಾಂಕ: 04ನೇ ಜೂನ್, 2011.**

ಶ್ರೀ ಜಯದೇವ ಪ್ರಕಾಶ್, ನಿವೃತ್ತ ಜಂಟಿ ನಿರ್ದೇಶಕರು (ಸಾಂಖ್ಯಿಕ) ಕರ್ನಾಟಕ ಲೋಕಾಯುಕ್ತ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಜಂಟಿ ನಿರ್ದೇಶಕ (ಸಾಂಖ್ಯಿಕ) ಹುದ್ದೆಗೆ, ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15 (1) (ಎ)ರನ್ವಯ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಲಾಗಿದೆ.

ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಮಾರ್ಕಂಡೇಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2)

**ಪಿ.ಆರ್. 738**

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಕಸಂವಾಪ್ರ 190 ಕಸನಿ 2007, ಬೆಂಗಳೂರು, ದಿನಾಂಕ: 30ನೇ ಮೇ, 2011.**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಜಂಟಿ ನಿರ್ದೇಶಕರ ಹುದ್ದೆಯಲ್ಲಿ ಕೆ.ಸಿ.ಎಸ್. ನಿಯಮ 32ರನ್ವಯ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಬಿ. ಟಿ. ಮುನಿರಾಜಯ್ಯ ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ₹. 18,150–26,925ರ ವೇತನ ಶ್ರೇಣಿಯ ಜಂಟಿ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನಾ ಮುಂಬಡ್ತಿ ನೀಡಿ ಅವರನ್ನು ಮುಂದಿನ ಆದೇಶದವರೆಗೆ ಜಂಟಿ ನಿರ್ದೇಶಕರು (ಸಾಮಾನ್ಯ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಈ ಹುದ್ದೆಯಲ್ಲಿ ಮುಂದುವರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ವಿ. ರಾಮಚಂದ್ರರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಪಿ.ಆರ್. 740**